ಶ್ರೀ ಲಕುಮೀಶ ಕವಿ ವಿರಚಿತ

# ಇಭರಾಮಪುರದ ಶ್ರೀ ಅಪ್ಪಾವರ ಚರಿತಾಮೃತಸಾರ

## (ಅಶ್ವಧಾಟಿಯಲ್ಲಿ)

ಶ್ರೀಶ ಲಕ್ಷ್ಮಿಗೆ ಬ್ರಹ್ಮಜೀವೇಶರಾ ನಮಿಸಿ ।
ಶ್ರೀ ಸರಸ್ವತಿ, ಕಾಳಿ, ವೀಶಾದಿ ಸ್ತುತಿಸೀ ॥
ಖೇಶನಿಗೆ ಅಭಿನಮಿಸಿ, ಅಪ್ಪಾವರ ದಿವ್ಯ ।
ಭಾಸುರ ಚರಿತೆ ನಾ ಲೇಶಮತಿ ಪೇಳ್ವೆ ॥ ೧ ॥

ಕಡಲವಾರಿಯ ಒಂದೆ ಕುಡುತೆಯಲಿ ಕುಡಿಬಹುದೆ ।
ಹಿಡಿದೆತ್ತಿ ಇಡಬಹುದೆ ಮೇರು ಪರ್ವತವಾ ॥
ಒಡೆಯ ಕೃಷ್ಣಾರ್ಯರ ಪಡಿ ಮಹಿಮೆ ವರ್ಣಿಪೆನೆ ।
ಜಡಮತಿಗೆ ವಶವಲ್ಲ ಸಡಗರದಿ ಕೇಳಿ ॥ ೨ ॥

ವೇದಾದಿಗಳ ಬಲ್ಲ ತಾ ಧರ್ಮ ಬಿಡಲೊಲ್ಲ ।
ಸಾಧು ಓಬಳಾರ್ಯ ಕೃಷ್ಣಾಂಬೆನಲ್ಲಾ ॥
ಈ ದಂಪತಿ ಮುದದಿ ಇಭರಾಮಪುರದಿರಲು ।
ಶ್ರೀದನಂಘ್ರಿಯ ಭಜಿಸಿ ಭೇದಮತದಿರಲು ॥ ೩ ॥

ಮಾಟದಲಿ ಮಕ್ಕಳು ಆಟವಾಡುವರಲ್ಲ ।
ಪಾಠಶಾಲೆಗೆ ಪೋಗೆ ಶೃಂಗರಿಸಲಿಲ್ಲ ॥
ಊಟ ಉಂಬುವರಿಲ್ಲ ಕಾಟಕೊಡುವವರಿಲ್ಲ ।
ತೋಟ ಪುಷ್ಪದಿ ದೇವರಾಟ ಮೊದಲಿಲ್ಲ ॥ ೪ ॥

ಸಂತತಿಯ ತಾವ್ನೆನೆದು ಚಿಂತೆಯೊಳಿರುತಿರಲು ।
ಸಂತಸದಿ ಗಣಧಾಳ ಪಂಚಾಸ್ಯಪವನನ ॥
ಪಂಥದಲಿ ಭಜಿಸುತ್ತ ಅಂತರಂಗದಿ ನೆನೆಯೆ ।
ಸಂತತಿಗೆ ವರವಿತ್ತು ಚಿಂತೆ ಕಳೆದಾ ॥ ೫ ॥

ಪವನನ ಸ್ತುತಿಸಿ ಸದ್ಭವನ ಕೊಡು ಎಂತೆಂದು ।
ದಿವರಾತ್ರಿ ಹಂಬಲಿಸಿ ಭವನಕ್ಕೆ ಬರಲೂ ॥
ಭುವನ ಮೂರರ ಗುರುವು ಸುವರವಿತ್ತಫಲದಿ ।
ಯುವತಿ ಕೃಷ್ಣಾಂಬೆಯು ಗರ್ಭವನು ಧರಿಸೆ ॥ ೬ ॥

ಹಲವು ಸದ್ಭಯಕೆಯಲಿ ನಳಿನಾಕ್ಷಿ ತಾ ತೊಳಲಿ ।
ಕೆಲವು ದಿನದಲಿ ದಿವ್ಯ ಚಲ್ವಾಂಗ ಪೊಳೆಯೆ ॥
ತುಲಸೀ ಕೃಷ್ಣನ ಪೂಜೆ ಪದ ಜಲವ ಸ್ವೀಕರಿಸಿ ।
ನಲಿದು ಪತಿಪದ ಸೇವೆ ಸಂತತವು ಮಾಡೆ ॥ ೭ ॥

ಶ್ರೀಮಂತಿಕೆಯಲ್ಲಿ ಸೀಮಂತ ವಿಧಿ ಮಾಡೆ ।
ಭೂಮಿ ಸುರರಿಗೆ ಉಣಿಸಿ ಭೋಜನಾದಿ ತಣಿಸೀ ॥
ಪ್ರೇಮದಲಿ ತಾಂಬೂಲ ಸದ್ದಕ್ಷಿಣೆಯಿತ್ತು ।
ನೇಮದಲಿ ಶೃತಿ ವಚನ ಆಶಿಷವು ಪೊಂದೇ ॥ ೮ ॥

ಪ್ರಮದೆ ಕೃಷ್ಣೆಯು ಅಂದು ಪೀತಾಂಬರಾ ಉಟ್ಟು ।
ಕಮನೀಯ ಬಳೆತೊಟ್ಟು ತಿಲಕ ಪಣೆಗಿಟ್ಟು ॥
ಕಮಲಾಕ್ಷಿ ರಾಜಿಸಲು ಜಡೆಗೆ ಸುಮಗಳ ಇಟ್ಟು ।
ಸುಮಂಗಲಿಯರಾರುತಿಯ ಮಾಡಿ ಫಲಕೊಟ್ಟು ॥ ೯ ॥

ಘೊರ ಕುಚಗಳ ವಕ್ಷೆ ಭಾರ ಗರ್ಭದ ವೀಕ್ಷೆ ।
ಧಾರುಣಿಗೆ ಶಿಶು ಬರುವ ವೀಕ್ಷೆ ಜಲಜಾಕ್ಷಿ ॥
ಮೀರೆ ಹೊಸ ಮಾಸಗಳು ಇಡೆ ಅಡಿಯು ಬಡವಾಗೆ ।
ಮಾರಮಣ ಸಂತಾನ ಶೌರಿಯಂ ನೆನೆದಳು ॥ ೧೦ ॥

ಶುಭ ಲಗ್ನದ್ರೇಷ್ಕಾಣ ಸದ್ಗ್ರಹ ವೀಕ್ಷಣಾ ।
ಶುಭ ಮಹರ್ದಶ ಪೂರ್ಣ ಶಿಶು ಜನ್ಮಕೇ ಕಾರಣಾ ॥
ವಸುಧಿಗೆ ಈತ ಬರಲು ಪಸರಿಸೇ ಮುಖ ಕಾಂತಿ ।
ನಸುನಕ್ಕು ನಲಿದರು ಬಂಧುಬಾಂಧವರು ॥ ೧೧ ॥

ಜಾತಕರ್ಮಾದಿಗಳ ಪ್ರೀತಿಯಲಿ ಪಿತಗೈಯ್ಯೆ ।
ಮಾತರಿಶ್ವನುಯಿತ್ತ ಪಾಥೇಯ ಭಾಗ್ಯ ॥
ಪೋತನಿವನಿಂತೆಂದು ಮಾತು ಮಾತಿಗೆ ನೆನೆದು ।
ಖ್ಯಾತ ಕೃಷ್ಣನು ಎಂದು ನಾಮವನು ಕರೆಯೆ ॥ ೧೨ ॥

ಜೋಗುಳದ ಪದ ಪೇಳಿ ತೂಗೆ ಈತನ ತೊಟ್ಲ ।
ಆಗಲೆ ಕೈ ಬಿಡಲು ಸತತ ತೊಟ್ಲಾಡೆ ॥
ಸಾಗಿ ಜನರು ಬಂದನುರಾಗದಲಿ ನೋಡಿದರು ।
ನೀಗಿ ಮನೆಕೆಲ್ಸಗಳ ಬಿಟ್ಟೆಲ್ಲರಂದು ॥ ೧೩ ॥

ಉಂಗುರುಂಗುರ ಕೇಶ ವದನ ನೋಡಲು ಹಾಸ ।
ಬಂಗಾರ ಉಡುದಾರ ಕಂಗಳಿಗೆ ಹರುಷಾ ॥
ಶೃಂಗರಿಸೆ ಈ ಕೃಷ್ಣ ಅಂಗಳದಿ ಆಡುತಿರೆ ।
ಅಂಗನೆಯರೆತ್ತೆತ್ತಿ ಚುಂಬಿಸಿದರನಿಶಾ ॥ ೧೪ ॥

ಅಂಬೆಗಾಲಿಕ್ಕಲಿತ ತುಂಬಿ ಕಂಧರದಿದ್ದ ।
ಸಂಭ್ರಮದ ಮೌಕ್ತಿಕದ ಹಾರ ಥೋರ ॥
ಕಂಬಿ ಹೇಮದಿ ಬಗಿದ ತುಲಸೀ ಹಾರ ।
ಕುಂಭಿನಿಗೆ ಬಡೆದಾಡೆ ಆಡಿದನು ಶೂರ ॥ ೧೫ ॥

ಬುದ್ಧಿ ಮಾಂದ್ಯನು ಅಲ್ಲ ವಿದ್ಯಾದಿ ತಾನೊಲ್ಲ ।
ಎದ್ದು ಉದಯದ ಪೂರ್ವ ಲಿಪಿ ಬರೆಯಲಿಲ್ಲ ॥
ದುಗ್ಧಾದಿಗಳ ಕುಡಿದು ಮೆದ್ದು ಮಿತ್ರರಗೂಡಿ ।
ಸದ್ದೆದ್ದು ಅಟಾಡೆ ಪಿತ ಬಯ್ದನಲ್ಲಾ ॥ ೧೬ ॥

ಅಂಜುತಲಿ ತಾ ತಂದೆ ಸಂಜೆಗೆಂಪಿನ ಮಗಗೆ।
ಮುಂಜಿಯನು ತಾ ಮಾಡಿ ಪೇಳೆ ವಿದ್ಯಾ॥
ಮಂಜು ಜ್ಞಾನದಿರೆ ಕುಂಜರವರದಾಂಘ್ರಿ।
ಕಂಜಕ್ಕೆ ನಮಿಸಿ ಪ್ರಭಂಜನ್ನ ನೆನೆದಾ ॥೧೭॥

ಗಂಧವಾಹನ ವರದಿ ಇಂದೆನ್ನ ಮಗನಾದೆ।
ಮಂದಹಾಸವ ಪಟ್ಟೆ ಮಂದ ನೀನಾದೆ॥
ಮುಂದೇನು ಗತಿ ನಿನಗೆ ಒಂದು ವಿದ್ಯವು ಬರದು।
ಎಂದು ತಂದೆಯು ಬಯ್ಯೆ ಮಂದಿರವ ಬಿಟ್ಟಾ ॥೧೮॥

ಬಡಬಡಿಸಿ ಅಡಿಯಿಟ್ಟ ಜಡನಂತೆ ಪೊರಮಟ್ಟ।
ಅಡಿಗಡಿಗೆ ಗೋಳಿಟ್ಟ ಹುಡಗೀತ ದಿಟ್ಟಾ॥
ಅಡವೀಗೆ ಬರೆ ಪುಟ್ಟ ನಿಟ್ಟುಸಿರು ತಾ ಬಿಟ್ಟ।
ದೃಢಮತಿಯ ಹರಿಲಿಟ್ಟ ದೃಗ್ಜಲವ ಬಿಟ್ಟಾ ॥೧೯॥

ಗಡ್ಡ ಜಡೆಗಳ ಸ್ವಾಮಿ ಗುಡ್ಡ ಮಗಳಿಗೆ ಪ್ರೇಮಿ।
ಗಿಡ್ಡಕೃಷ್ಣಗೆ ಒಲಿಯೆ ಬಂದಾತ ದ್ರೌಣಿ॥
ಅಡ್ಡಬಿದ್ದಳುವಂಥ ದಡ್ಡನ ಜಿಹ್ವೆಯೊಳು।
ವಿಡ್ದೂರದಲಿ ಈತ ಬೀಜಾಕ್ಷರಿಟ್ಟಾ ॥೨೦॥

ಭಿಕ್ಷುಕನು ತಾ ಬಂದು ಪರಿಕ್ಷಿದ್ರಾಜನಿಗೆ।
ಪಕ್ಷಿಧ್ವಜ ಕಥೆ ಪೇಳಿ ರಕ್ಷೀಸಿದವನೇ॥
ಸಾಕ್ಷಾತು ತಾ ಬಂದು ಬೀಜಾಕ್ಷರೀತಗೀಯೆ।
ದಾಕ್ಷಾಯಣೀಶ ಸಖ ತಕ್ಷಣವೆ ಒಲಿದಾ ॥೨೧॥

ಮೋದದಲಿ ತಾ ಬಂದ ದೃಗ್ಜಲದಿ ತಾ ತೊಯ್ದು।
ವೇದನೆಯು ಪಡುವಂಥ ಪಿತೃಮಾತ್ರರ॥
ಪಾದದಲಿ ಬಿದ್ದೆದ್ದು ಬಾಧೆಗಳ ತಾ ಮರೆದು।
ಸಾದರದಿ ನಡೆದಂಥ ಕೌತುಕವ ಪೇಳ್ದಾ ॥೨೨॥

ಅಂದು ಸುರುಚಿಯು ಬಯ್ಯೆ ಕಂದನಿಗೆ ಹರಿ ಒಲಿದ ।
ಇಂದು ನಾ ನಿನ್ನ ಬಯ್ಯೆ ಇಂದುಧರ ಕಾಯ್ದ ॥
ಕಂದನಗಲಿಕೆ ಪ್ರೇಮ ಬಂಧನಕೆ ತಾ ಮಿಡಕಿ ।
ನಂದ ಶರಧಿಯ ಪೊಕ್ಕು ಅಂದದಲಿ ನಲಿದಾ ॥ ೨೩ ॥

ಕರುಣರಸ ಶ್ರೀ ಮೂರ್ತಿ ಧರೆಯಲ್ಲಿ ಪ್ರಖ್ಯಾತಿ ।
ಪರಿಮಳಾರ್ಯರ ಮೂರ್ತಿ ಜಗವೆಲ್ಲ ಭರ್ತಿ ॥
ಭರದಿಂದ ಕೃಷ್ಣಮೂರ್ತಿ ಇವರಲ್ಲಿ ಮಾಡಿ ಭಕ್ತಿ ।
ಉರುತದಿ ಸೇವೆಗೈದ ವರಮಂತ್ರ ಗೃಹದಿ ॥ ೨೪ ॥

ಗುರುರಾಜರಾ ಚರಣ ಶರಣ ಜನರಾಭರಣ ।
ಶರಣರ ದುರಿತ್ತಹರಣ ಸರ್ವಸುಖ ಕಾರಣ ॥
ಮರುತ ಶಾಸ್ತ್ರ ಗ್ರಹಣ ಈತಗಾಗೆ ಕ್ಷಣ ಕ್ಷಣ ।
ವರ ಸುಧಾದಿ ಜ್ಞಾನ ಪರಿಮಳದಿ ಜಾಣ ॥ ೨೫ ॥

ಹರಿ ಸ್ಮರಣೆಯಲಿ ಎದ್ದ ರವಿ ಕಿರಣ ಬರದೆದ್ದ ।
ವರ ಮುಖದಿ ಪರಿಶುದ್ಧ ಮೃದ ಶೌಚ ಶುದ್ಧ ॥
ಸುರಭಿ ವಿಪ್ರರ ನಮಿಸಿ ಸಿರಿ ತುಲಸಿ ಮೃದ ಧರಿಸಿ ।
ಗುರು ಪರಂಪರ ವಚಿಸಿ ದಾಸರನು ನೆನೆದಾ ॥ ೨೬ ॥

ಸ್ನಾನದಲಿ ದೇಹಗತ ಸ್ಥಾನನಾಡೀಗತನ ।
ಜಾಣ ಎಡಬಲಕಿರುವ ಸ್ತ್ರೀಪುರುಷವರಿತೂ ॥
ಮಾಣ ಎಪ್ಪತ್ತೆರಡು ಈ ನಾಡಿ ಸಾಹಸ್ರ ।
ತಾ ನೆನೆದು ಗಂಗಾದಿ ನಿತ್ಯದಲಿ ಮಿಂದಾ ॥ ೨೭ ॥

ಅಂದದಲಿ ಈತನೀಗೆ ಬಂದೇರೆ ಯೌವನವು ।
ನಂದನಂದನ ಹೃತ್ಮಂದಿರದಿ ಧ್ಯಾನ ॥
ಸಂಧಿಸಲು ದಿವ್ಯ ತೇಜ ನಂದದಲಿ ಹಿರಿಯರು ।
ನಂದವರದಚ್ಚಮ್ನ ವೈವಾಹ ಗೈಯ್ಯೆ ॥ ೨೮ ॥

ಸ್ವಚ್ಛಮನೆಯೊಳು ಕೆಲ್ಸ ಅಚ್ಚುತನ ನೆನೆ ಹರುಷ।
ಬೆಚ್ಚಿ ಹಿರಿಯರಿಗನಿಶ ಸೇವೆಗುಲ್ಲಾಸ॥
ಸಚ್ಚರಿತ್ರೆಯು ಎನಿಸೆ ಅಚ್ಚಮ್ಮ ಬಾಳಿನಲಿ।
ಉತ್ಸುಕದಿ ಪತಿ ಒಲಿಸೆ ಮೆಚ್ಚೆ ಕೃಷ್ಣಾರ್ಯ ॥ ೨೯ ॥

ಹೇಮ ಕಾಮಿನಿ ಆಸೆ ಕಾಮಾದಿಗಳ ಬಿಟ್ಟ।
ನೇಮಾದಿಗಳ ತೊಟ್ಟ ಮನಶುಚಿಯಲಿಟ್ಟ॥
ತಾಮಸ ಗುಣ ಬಿಟ್ಟ ಹರಿಪದದಿ ಮನನೆಟ್ಟ।
ಕಾಮೀತ ಜನರಿಷ್ಟ ಪ್ರೇಮದಲಿ ಕೊಟ್ಟಾ ॥ ೩೦ ॥

ಪ್ರಾತದಲಿ ಸಂಕಲ್ಪಗದ್ಯವನು ವಾಚಿಸುತ।
ಭ್ರಾತ್ರರಿಗೆ ವಾತಸ್ಮೃತಿ ಪ್ರೀತಿಯಲಿ ಪೇಳಿ॥
ಖ್ಯಾತ ಪರಿಮಳ ಗ್ರಂಥ ಆತ ತಿಳಿಸೇ ಸ್ಥಳವು।
ಭೂತಳದಿ ಬಹುದೂರ ಪರಿಮಳವೆ ತುಂಬೇ ॥ ೩೧ ॥

ಒಪ್ಪೂವ ಭಕ್ತಿಯೊಳು ತಪ್ಪದಲೆ ಭಜಿಪರಿಗೆ।
ಬಪ್ಪಿಪ್ಪ ಅಘಕಳಿಯೆ ಒಪ್ಪೂವ ಜನರೂ॥
ಅಪ್ಪನಂತೆ ಪೊರೆಯೆ ಅಪ್ಪಾವರೆನಿಸಿದರು।
ಕುಪ್ಪಿಜನರಿವರೊಡನೆ ಇಷ್ಟಾರ್ಥಪೊಂದೇ ॥ ೩೨ ॥

ತ್ವರಗೋಪಿ ಚಂದನವ ಹರಿನಾಮವಲಿ ಧರಿಸಿ।
ಸಿರಿ ಮುದ್ರೆಗಳ ಧರಿಸಿ ವರ ತುಲಸೀ ಮಾಲೆ॥
ಗುರುಮಂತ್ರಗಳ ಜಪಿಸಿ, ತತ್ವ ಮಾತೃಕ ಮಂತ್ರ।
ಸ್ಥಿರಮತಿಯು ತಾ ಜಪಿಸಿ, ಹರಿ ಪೂಜೆ ಗೈಯ್ದಾ ॥ ೩೩ ॥

ತಲೆಗೆ ಪೇಟವನ್ನಿಟ್ಟು ಮೇಲದಕೆ ಜರೆ ಕಟ್ಟು।
ಪೊಳೆವ ಕಂಧರಕೆ ಶ್ರೀ ನವರತ್ನಕಟ್ಟು॥
ಬಲ ಮುಂಗೈಗೆ ಶ್ರೀ ಹೇಮ ಕಂಕಣವಿಟ್ಟು।
ಚಲುವರಿರೆ ಅರಿಯೆ ಆಧ್ಯಾತ್ಮಗುಟ್ಟು ॥ ೩೪ ॥

ಮಹಿತ ಕೃಷ್ಣಾರ್ಯರ ಕೃಷ್ಣಭೂಪನು ಕರೆಯೆ ।
ಮಹಿಷಪುರದಲಿ ರಾಜ ಮಹಿಷಿ ಬ್ರಹ್ಮತ್ಯ ॥
ಮಹಿಯೊಳಗೆ ಅಡಗಿದ್ದ ಪಂಚಮುಖ ಪವನನ ।
ವಿಹಿತದಲಿ ತಾ ಗೊಂಡು ಬಿಡಿಸಿ ಪೊರೆದಾ ॥ ೩೫ ॥

ಪಂಚಮುಖನಡಿ ಬಿದ್ದ ಗಾಣಧಾಳಕೇ ಎದ್ದ ।
ಪಂಚೆರಡು ಕಿವಿಗೆದ್ದ ಪಂಚಾಷ್ಟ ದಿನದಿ ಇದ್ದ ॥
ಹಂಚಿಕೆಯ ಸೇವೆ ಬದ್ಧ ತಾನಾಗೆ ಪ್ರಬುದ್ಧ ।
ಪಂಚಮುಖ ದೇವನ ಪ್ರತ್ಯಕ್ಷ ನೋಡ್ದಾ ॥ ೩೬ ॥

ಗಣಪನ ತಂದ್ಯಂಶ ಗಣೇಶಾರ್ಯರಿಗೆ ।
ನಿರ್ಣಯದ ಸನ್ಯಾಸ ಮಂತ್ರಮಂದಿರದಿ ॥
ಮಣಿದಾರ್ಯಗೆ ಪೇಳಿ ಕಳಿಸೆ ಇವರನು ಆಗ ।
ಗಣಪನ ಪಿತ ಕ್ಷೇತ್ರ ಗರಳೂರ್ಲಿ ಪೊಂದೆ ॥ ೩೭ ॥

ಶಿವನೊಲಿದ ಇವರಿಂದ ಶಿವಪೊಂದಿದಾ ಭಕ್ತ ।
ಶಿವಮೊಗ್ಗೆ ಭಕ್ತೋರ್ವ ಇವರ್ನಾಮ ಬರೆದೂ ॥
ತವಕದಲಿ ಮರ ದಿಮ್ಮಿ ಬಹುವಾಗಿ ನದಿ ಪೂರ ।
ಪ್ರವಹ ತುಂಗೆಯಲಿ ಬಿಡಲು ಇವರಿಲ್ಲಿ ಪೊಂದೆ ॥ ೩೮ ॥

ರಂಗಪ್ಪನೆಂಬಾಳ ಅಂಗನೆಯು ಹಂಪೇಗೆ ।
ಶೃಂಗಾರ ಜಾತ್ರೆ ರಥ ನೋಡ ಬರಲೂ ॥
ಬಂಗಾರಿ ಚಿಣ್ಣ ಮಗ ಊರಲ್ಲಿ ಗೋಳಿಡಲು ।
ಕಂಗಳಿಗೆ ಮನೆ ಮೇಲೆ ತೋರೀದರಿವರು ॥ ೩೯ ॥

ನಂದವರ ದೇಸಾಯಿ ನಂದರಿಲ್ಲದೆ ಮಿಡುಕಿ ।
ಬಂದು ಮಂತ್ರಾಲಯದಿ ಗುರುವೇವೆ ಮಾಡೆ ॥
ಮುಂದಿದ್ದ ದ್ವಾದಶಿ ಅಂದು ಸಾಧನೆಯ ದಿನ ।
ಒಂದು ಸಾವಿರ ವಿಪ್ರರಂದುಣಿಸೇ ಸಿದ್ಧಿ ॥ ೪೦ ॥

ಎಂದು ಸ್ವಪ್ನದಿ ಪೇಳ್ದ ಅಂದ ವಚನಕೆ ಬಾಡೆ ।
ತಂದೆ ಶ್ರೀ ಗುರುರಾಜ ಬಂದ ಮತ್ತು ಸುರಿದ ॥
ಒಂದೆ ಅಪ್ಪಾವರಾರಿಂದ ಸಾವಿರ ದೂಟ ।
ಪೊಂದುವೆ ಫಲವನ್ನೆ ಅಂದದನು ಗೈದ ॥ ೪೧ ॥

ಅಂದದಲಿ ಇವರೊಮ್ಮೆ ಪಾರ್ಥಮಿತ್ರನ ಸ್ತುತಿಸಿ ।
ಸ್ವಾರ್ಥರಹಿತಾರಾಗಿ ಮಂತ್ರಾಕ್ಷತೆಯ ನೀಡೇ ॥
ಮಾತುಳಾರಿಯ ನೆನೆದು ಆತ ಸಂಪುಟದಿಟ್ಟು ।
ಪ್ರೀತಿಯಲಿ ಪೂಜಿಸಲು ವಿಷ್ಣುವಿಗ್ರಹವ ಕಂಡ ॥ ೪೨ ॥

ಇಷ್ಟ ಮಹಿಷಪುರದಿ ಕಟ್ಟೀಯ ಮನಿಯಲ್ಲಿ ।
ದಿಟ್ಟ ಪರಿಚಾರಕರು ಕುಷ್ಠದಲಿ ಬಳಲೇ ॥
ಶ್ರೇಷ್ಠಪ್ಪಾವರ ಸ್ನಾನ ಘಟ್ಟಾನೆ ಗೈದಲ್ಲಿ ।
ಮುಟ್ಟೊರಳೆ ಕೆಸರಿನಲಿ ಬಿಟ್ಟೀತು ರೋಗ ॥ ೪೩ ॥

ಸುಂದರ ಕಾರ್ಪರದ ನಂದೀಯ ಗುಡಿಯಲ್ಲಿ ।
ನಂದತೀರ್ಥರ ಶಾಸ್ತ್ರ ಪೊತ್ತಂಥ ನಂದೀ ॥
ಎಂದೆನುತ ತಿಳಿದಿಲ್ಲಿ ನಂದನಂದನ ಭಜಿಸಿ ।
ವಂದಿಸಿದ ನರ್ಸಮ್ಮಗೆ ಕಂದರನು ಇತ್ತಾ ॥ ೪೪ ॥

ಶ್ರೀ ಗದುಗಿನಲ್ಲಿ ಓರ್ವ ಯೋಗಿ ನಾರಾಯಣರು ।
ಬಾಗದಲೆ ಇವರೀಗೆ ಕೂಗಿದರು ನಿಂದೇ ॥
ಪೋಗುವೆನು ಅಪ್ಪಾವರ ಸದ್ಗ್ರಹದ ಹೃದ್ಯದಲಿ ।
ಈಗಲೆ ಎಂತೆಂದು ಗದುಗೀಶ ಪೇಳೆ ॥ ೪೫ ॥

ಕೊಟ್ಟ ಸ್ವಪ್ನದಿ ಇವರು ಕುಟ್ಟಿಮನದಾ ವೃತ್ತಿ ।
ಕೃಷ್ಣಾರ್ಯರಿದ್ದೆಡೆಗೆ ಬಂದು ನೊಂದೂ ॥
ಕೆಟ್ಟಪಾಪಿಯು ನಾನು ಕಟ್ಟೀದೆ ಅಪವಾದ ।
ಶಿಷ್ಟಗುರು ಪೊರೆಯೆಂದು ಅಡಿಬಿಡದೆ ಪಿಡಿದಾ ॥ ೪೬ ॥

ಅಂದದಲಿ ರಾಯರ ವೃಂದಾವನ ತಾ ಮಾಡಿ ।
ಬಂಧೂರದಲಿ ಯೋಗಿ ನಾರಾಯಣಾರ್ಯ ।
ಅಂದು ಗದುಗಿನಲ್ಲಿ ವಂದೀಸಿ ಪ್ರಾರ್ಥಿಸಲು ।
ಸುಂದರ ಕೃಷ್ಣಾರ್ಯ ಸ್ಥಾಪನೆಯ ಮಾಡೆ ॥ ೪೭ ॥

ಮುಜುಂದಾರ ಭೀಮಪ್ಪ ನಿಜ ಮಾಡದರೆ ತಪ್ಪ ।
ಸೃಜಿಸೆ ಈತಗೆ ಮರಣ ಶಾಸನವು ತಪ್ಪ ॥
ಕುಜನರೀಯಲು ಈತಗೆ ಸ್ತುತಿಸೆ ಅಪ್ಪಾವರರ ।
ಭಜಿಸೆ ಗದುಗೀಶನ ತೋರಿ ಕಾಯ್ದರಿವರು ॥ ೪೮ ॥

ಗಟ್ಯಾಗಿ ಕಾಯ್ದಿವರ ಬಿಟ್ಟಿರೆನು ಪದವೆನ್ನೆ ।
ಕೃಷ್ಣಾರ್ಯ ತಮ ಮೂರ್ತಿ ರಜತದ್ದು ನೀಡೇ ॥
ಪಟ್ಟೀತ ಸಂತಸದಿ ಶಿಷ್ಟಮತಿ ಅರ್ಚಿಸಲು ।
ಸೊಟ್ಟೆಂದು ಕಿವಿ ಬಡೆಸೆ ರಕ್ತವನೆ ಕಂಡ ॥ ೪೯ ॥

ಉತ್ತರ ಕ್ಷೇತ್ರಗಳ ಬದ್ರ್ಯಾದಿ ತೀರ್ಥಗಳ ।
ಸತ್ಫಲವ ತಾ ಬಯಸೆ ಉತ್ತೂಮ ಶಿಷ್ಯಂಗೆ ॥
ಹತ್ತೀರ ಮಲಗೆಂದು ಫಲ ಸಹಿತ ಸ್ವಪ್ನದಲಿ ।
ಚಿತ್ತದಲಿ ತಾ ತೋರಿ ಭೃತ್ಯನ್ನ ಕಾಯ್ದ ॥ ೫೦ ॥

ಭವಾನಿ ಭುಜಂಗರ ಭವನ ಪ್ರಸ್ತದ ರಾತ್ರಿ ।
ಅವಗೆ ಮರಣವು ಬರಲು ತವಕದಲಿ ನೀವು ॥
ಪವನ ಪಿತನನ ಸ್ತುತಿಸಿ ಭವಣೆಯನು ನೀವ್ಬಿಡಿಸೆ ।
ತವಕದಲಿ ಬದುಕಿಸಿದ ತವ ಮಹಿಮೆ ಮರೆಯೆ ॥ ೫೧ ॥

ಅಂದದಲಿ ಭೂಪಾಲ ಹಿಂದೆ ಗದ್ವಾಲದಲಿ ।
ಒಂದು ಸಾವಿರಕಧಿಕ ಮಂದಿ ಭೋಜನಕೆ ॥
ಬಂದಿಲ್ಲ ಘೃತವೆನ್ನೆ ತಂದ ಕೃಷ್ಣೆಯ ಜಲವ ।
ವೃಂದ ಘಟಗಳ ತುಪ್ಪ ಅಂದಿತ್ತು ಕಾಯ್ದೆ ॥ ೫೨ ॥

ಶುಭಪೊಂದೆ ಗದ್ವಾಲ ಪ್ರಭುರಾಜ ನಿಮ್ಮಿಂದ ।
ಅಭಯವನು ತಾ ನಿತ್ತು ಕೇಳೆ ನಿಮ್ಮಾಶೆ ॥
ಅಬುಜಾಸನಾ ಭಾವಿ ಶಿಲೆ ಮೂರ್ತಿ ನೀವ್ಕರೆದು ।
ಇಭರಾಮಪುರದಿಟ್ಟ ಕೌತುಕವ ಮರೆಯೆ ॥ ೫೩ ॥

ತವ ಜನ್ಮದ್ಹಬ್ಬಕ್ಕೆ ಕವಿ ಜನರು ಬಂದಿರಲು ।
ಗರ್ವ ರಾಮಾರ್ಯಗೆ ಗುರುರಾಜ ಸ್ವಪ್ನ ॥
ಹವಣಿಲಿ ತಾ ಪೇಳೆ ಇವರ್ಬಂದು ಸುಧೆ ಪೇಳೆ ।
ಪ್ರವರರರಿಯದವನಿಂದ ಮದವಿಳಿಸಿದೇ ॥ ೫೪ ॥

ಪಿತೃಮಾತೃಗಳ ದಯವೋ ಹಿತವಿತ್ತ ಸುಜಯೀಂದ್ರ ।
ಯತಿವರೇಣ್ಯರ ಕೃಪೆಯೋ ಗತಿಗೆ ಸತ್ಪಥ ತೋರ್ದ ॥
ಮತಿವಂತ ಶ್ರೀ ಶ್ಯಾಮಸುಂದರರ ದಯವೋ ।
ಪಿತ ಸೇವೆ ಗೈದುದಕೆ ಮತಿಯಿತ್ತು ಕಥೆ ಬರಿಸಿದ ॥ ೫೫ ॥

ತಪ್ಪುಗಳೆ ಅತಿ ಬಹಳ ಒಪ್ಪುವ ನುಡಿ ವಿರಳ ।
ಶಬ್ದಾರ್ಥ ನುಡಿತಪ್ಪ ನೋಡದೆ ಸರಳಾ ॥
ಒಪ್ಪಿ ಬುಧಜನರೆನಗೆ ಆಶಿಷವ ಕೊಡಿರೆಂದು ।
ಮುಪ್ಪಿನವ ನಾ ಬೇಡ್ವೆ ತಪ್ಪದಲೆ ಸಲಹಿ ॥ ೫೬ ॥

ತಂದೆತಾಯಿಯ ದಿವ್ಯ ಆಶಿಷದ ಬಲವೋ ।
ಹಿಂದೆನ್ನ ಪಿತನಂದು ಇವರಾರಾಧನೆಗೆ ಬಂದು ॥
ನಿಂದು ಓಡಾಡುತ ಗೈಸೀದ ಫಲವೋ ।
ಇಂದಿವರು ಎನಗೊಲಿಯೆ ಸ್ತುತಿಗೈಯ್ದೆನು ॥ ೫೭ ॥

ಕಟ್ಟು ಕಥೆಯಿದು ಅಲ್ಲ ದುಷ್ಟರಿಗೆ ಸಿಗರೊಲ್ಲ ।
ಗಟ್ಯಾಗಿ ಇವರ್ಭಜಿಸೆ ಬಿಟ್ಟಿರನು ತಾ ಬಲ್ಲ ॥
ಇಷ್ಟಾರ್ಥ ಸುರಿಮಳೆಯ ಕೊಡುವರಿದು ಸುಳ್ಳಲ್ಲ ।
ಎಷ್ಟೋಳಲಿವರ ಮಹಿಮೆ ಅರಿಯೆ ನಾ ಖುಲ್ಲ ॥ ೫೮ ॥

ಸತತ ಇವರ ಸ್ಮರಣೆ ಸದ್ಗತಿಗೆ ಕಾರಣ ।
ಪ್ರತಿನಿತ್ಯ ಇದು ಪಠಿಸೆ ಅಘವೆಲ್ಲ ಹರಣ ॥
ಪಿತೃಮಾತೃ ಹಿತ ಬಂಧು ನಂಬಿದವರ ಚರಣ ।
ಪ್ರತಿಕೂಲ ನಿನಗಿಲ್ಲ ಸಾಕ್ಷಿ ನಾರಾಯಣ ॥ ೫೯ ॥

ಧೀರರಿವರ ಚರಿತೆ ವಾರಿಧಿಯ ನಾ ಪೊಕ್ಕು ।
ಸೇರಿದ ಕರ ರತ್ನದ್ಹಾರವನು ರಚಿಸೀ ॥
ಸಾರ ಭಕ್ತಿಯ ತುಲಸೀ ಶ್ರೀರಮಣಗರ್ಪಿಪೆನು ।
ಶೌರಿ ಸದ್ಗುಣ ಭಕ್ತಿವೈರಾಗ್ಯ ಕೊಡಲೀ ॥ ೬೦ ॥

ಶಬ್ದಾದಿ ಶಾಸ್ತ್ರಗಳ ಅಧ್ಯಯನ ಎನಗಿಲ್ಲ ।
ಮುದ್ದು ಸುರಿಯುವ ದಿವ್ಯ ಕವಿತೆಯಲ್ಲ ॥
ಉದ್ಧರಿಸಲಿವರೆಂಬ ಉದ್ದೇಶ್ಯದೊಳು ಬರೆದೆ ।
ಮಧ್ವೇಶನಾದ ಶ್ರೀ ಲಕುಮೀಶನೊಲಿಯೇ ॥ ೬೧ ॥

❖ ❖ ❖